ಶ್ರೀ ಜಗನ್ನಾಥ ದಾಸಾರ್ಯ ವಿರಚಿತ

# ॥ ಶ್ರೀ ಲಕ್ಷ್ಮೀ ಹೃದಯ ಸ್ತೋತ್ರಮ್ ॥

ಶ್ರೀ ಮನೋಹರೆ ಲಕುಮಿ ತವಪದ ತಾಮರಸಯುಗ ಭಜಿಪೆ ನಿತ್ಯದಿ
ಸೋಮಸೋದರಿ ಪರಮಮಂಗಳೆ ತಪ್ತಕಾಂಚನಳೇ ।
ಸೋಮಸೂರ್ಯಸುತೇಜೋರೂಪಳೆ ಹೇಮಸನ್ನಿಭ ಪೀತವಸನಳೆ
ಚಾಮೀಕರಮಯ ಸರ್ವಭೂಷಣ ಜಾಲಮಂಡಿತಳೇ, ಭೂಷಣ ಜಾಲಮಂಡಿತಳೇ ॥ ೧ ॥

ಬೀಜಪೂರಿತ ಹೇಮಕಲಶವ ರಾಜಮಾನ ಸುಹೇಮ ಜಲಜವ
ನೈಜ ಕರದಲಿ ಪಿಡಿದುಕೊಂಡು ಭಕುತಜನತತಿಗೇ ।
ಮಾಜದಲೆ ಸಕಲೇಷ್ಟ ನೀಡುವ ರಾಜಮುಖಿ ಮಹದಾದಿವಂದ್ಯಳೆ
ಮೂಜಗತ್ತಿಗೆ ಮಾತೆ ಹರಿವಾಮಾಂಕದೊಳಗಿರ್ಪ, ಹರಿವಾಮಾಂಕದೊಳಗಿರ್ಪೆ ॥ ೨ ॥

ಶ್ರೀ ಮಹತ್ತರ ಭಾಗ್ಯಮಾನಿಯೇ ಸ್ತೌಮಿ ಲಕುಮಿ ಅನಾದಿ ಸರ್ವ ಸು-
ಕಾಮ ಫಲಗಳನೀವ ಸಾಧನ ಸುಖವಕೊಡುತಿರ್ಪ ।
ಕಾಮಜನನಿಯೆ ಸ್ಮರಿಪೆ ನಿತ್ಯದಿ ಪ್ರೇಮಪೂರ್ವಕ ಪ್ರೇರಿಸೆನ್ನನು
ಹೇ ಮಹೇಶ್ವರಿ ನಿನ್ನ ವಚನವ ಧರಿಸಿ ಭಜಿಸುವೆನು, ಧರಿಸಿ ಭಜಿಸುವೆನು ॥ ೩ ॥

ಸರ್ವ ಸಂಪದವೀವ ಲಕುಮಿಯೆ ಸರ್ವ ಭಾಗ್ಯವನೀವ ದೇವಿಯೆ
ಸರ್ವಮಂಗಳವೀವ ಸುರವರ ಸಾರ್ವಭೌಮಿಯಳೇ ।
ಸರ್ವ ಜ್ಞಾನವನೀವ ಜ್ಞಾನಿಯೆ ಸರ್ವ ಸುಖಫಲದಾಯಿ ಧಾತ್ರಿಯೆ
ಸರ್ವಕಾಲದಿ ಭಜಿಸಿ ಬೇಡಿದೆ ಸರ್ವ ಪುರುಷಾರ್ಥ, ಬೇಡಿದೆ ಸರ್ವ ಪುರುಷಾರ್ಥ ॥ ೪ ॥

ನತಿಪೆ ವಿಜ್ಞಾನಾದಿ ಸಂಪದ ಮತಿಯ ನಿರ್ಮಲ ಚಿತ್ರ ವಾಕ್ಪದ
ತತಿಯ ನೀಡುವದೆನಗೆ ಸರ್ವದ ಸರ್ವ ಗುಣಪೂರ್ಣೇ ।
ನತಿಪ ಜನರಿಗನಂತಸೌಖ್ಯವ ಅತಿಶಯದಿ ನೀನಿತ್ತ ವಾರ್ತೆಯು
ವಿತತವಾಗಿಹದೆಂದು ಬೇಡಿದೆ ಭಕ್ತವತ್ಸಲಳೇ, ಬೇಡಿದೆ ಭಕ್ತವತ್ಸಲಳೇ ॥ ೫ ॥

ಸರ್ವ ಜೀವರ ಹೃದಯ ವಾಸಿನಿ ಸರ್ವ ಸಾರ ಸುಭೋಕ್ತ್ರಿ ಸರ್ವದಾ
ಸರ್ವ ವಿಶ್ವದಲಂತರಾತ್ಮಕೆ ವ್ಯಾಪ್ತೆ ನಿರ್ಲಿಪ್ತೆ ।
ಸರ್ವ ವಸ್ತು ಸಮೂಹದೊಳಗೆ ಸರ್ವ ಕಾಲದಿ ನಿನ್ನ ಸಹಿತದಿ
ಸರ್ವ ಗುಣ ಸಂಪೂರ್ಣ ಶ್ರೀ ಹರಿ ತಾನೆ ಇರುತಿರ್ಪ, ಶ್ರೀ ಹರಿ ತಾನೆ ಇರುತಿರ್ಪ ॥ ೬ ॥

ತರಿಯೆ ನೀ ದಾರಿದ್ರ್ಯ ಶೋಕವ ಪರಿಯೆ ನೀನಜ್ಞಾನ ತಿಮಿರವ
ಇರಿಸು ತ್ವತ್ಪದ ಪದ್ಮಮನ್ಮನೋ ಸರಸಿ ಮಧ್ಯದಲಿ ।
ಚರರ ಮನಸಿನ ದುಃಖ ಭಂಜನ ಪರಮ ಕಾರಣವೆನಿಪ ನಿನ್ನಯ
ಕರುಣಪೂರ್ಣ ಕಟಾಕ್ಷದಿಂದಭಿಷೇಕ ನೀ ಮಾಡೇ, ಅಭಿಷೇಕ ನೀ ಮಾಡೇ ॥ ೭ ॥

ಅಂಬಾ ಎನಗೆ ಪ್ರಸನ್ನಳಾಗಿ ತುಂಬಿ ಸೂಸುವ ಪರಮ ಕರುಣಾ -
ವೆಂಬ ಪೀಯುಷ ಕಣದಿ ತುಂಬಿದ ದೃಷ್ಟಿ ತುದಿಯಿಂದ ।
ಅಂಬುಜಾಕ್ಷಿಯೆ ನೋಡಿ ಎನ್ನ ಮನೆ ತುಂಬಿಸೀಗಲೆ ಧಾನ್ಯ ಧನಗಳ
ಹಂಬಲಿಸುವೆನು ಪಾದಪಂಕಜ ನಮಿಪೆನನವರತ, ನಮಿಪೆನನವರತ ॥ ೮ ॥

ಶಾಂತಿನಾಮಕೆ ಶರಣ ಪಾಲಕೆ ಕಾಂತಿನಾಮಕೆ ಗುಣಗಣಾಶ್ರಯೇ
ಶಾಂತಿನಾಮಕೆ ದುರಿತನಾಶಿನಿ ಧಾತ್ರಿ ನಮಿಸುವೆನು ।
ಭ್ರಾಂತಿನಾಶನಿ ಭವದ ಶಮದಿಂಶ್ರಾಂತನಾದೆನು ಭವದಿ ಎನಗೆ ನಿ-
ತಾಂತ ಧನ ನಿಧಿ ಧಾನ್ಯ ಕೋಶವನಿತ್ತು ಸಲಹುವುದು, ಇತ್ತು ಸಲಹುವುದು ॥ ೯ ॥

ಜಯತು ಲಕ್ಷ್ಮೀ ಲಕ್ಷಣಾಂಗಿಯೆ ಜಯತು ಪದ್ಮಾ ಪದ್ಮವಂದ್ಯಳೆ
ಜಯತು ವಿದ್ಯಾ ನಾಮೆ ನಮೋ ನಮೋ ವಿಷ್ಣುವಾಮಾಂಕೇ ।
ಜಯಪ್ರದಾಯಕೆ ಜಗದಿವಂದ್ಯಳೆ ಜಯತು ಜಯ ಚೆನ್ನಾಗಿ ಸಂಪದ
ಜಯವೆ ಪಾಲಿಸು ಎನಗೆ ಸರ್ವದಾ ನಮಿಪೆನನವರತ, ನಮಿಪೆನನವರತ ॥ ೧೦ ॥

ಜಯತು ದೇವೀ ದೇವ ಪೂಜ್ಯಳೆ ಜಯತು ಭಾರ್ಗವಿ ಭದ್ರ ರೂಪಳೆ
ಜಯತು ನಿರ್ಮಲ ಜ್ಞಾನವೇದ್ಯಳೆ ಜಯತು ಜಯ ದೇವೀ ।
ಜಯತು ಸತ್ಯಾಭೂತಿ ಸಂಸ್ಥಿತೆ ಜಯತು ರಮ್ಯಾ ರಮಣ ಸಂಸ್ಥಿತೆ
ಜಯತು ಸರ್ವ ಸುರತ್ನ ನಿಧಿಯೊಳಗಿರ್ಪೆ ನಿತ್ಯದಲಿ, ನಿಧಿಯೊಳಗಿರ್ಪೆ ನಿತ್ಯದಲಿ ॥ ೧೧ ॥

ಜಯತು ಶುದ್ಧಾ ಕನಕ ಭಾಸಳೆ ಜಯತು ಕಾಂತಾ ಕಾಂತಿ ಗಾತ್ರಳೆ
ಜಯತು ಜಯ ಶುಭ ಕಾಂತೆ ಶೀಘ್ರದೆ ಸೌಮ್ಯ ಗುಣ ರಮ್ಯೇ ।
ಜಯತು ಜಯಗಳದಾಯಿ ಸರ್ವದಾ ಜಯವೆ ಪಾಲಿಸು ಸರ್ವ ಕಾಲದಿ
ಜಯತು ಜಯ ಜಯ ದೇವಿ ನಿನ್ನನು ವಿಜಯ ಬೇಡಿದೆನು, ವಿಜಯ ಬೇಡಿದೆನು ॥ ೧೨ ॥

ಆವ ನಿನ್ನಯ ಕೆಳೆಗಳಿಂದಲಿ ಆ ವಿರಿಂಚಿಯು ರುದ್ರ ಸುರಪತಿ
ದೇವ ವರಮುಖ ಜೀವರೆಲ್ಲರೂ ಸರ್ವಕಾಲದಲಿ ।
ಜೀವಧಾರಣೆ ಮಾಡೋರಲ್ಲದೆ ಆವ ಶಕ್ತಿಯೂ ಕಾಣೆನವರಿಗೆ
ದೇವಿ ನೀ ಪ್ರಭು ನಿನ್ನ ಶಕ್ತಿಲಿ ಶಕ್ತರೆನಿಸುವರು, ಶಕ್ತರೆನಿಸುವರು ॥ ೧೩ ॥

ಆಯು ಮೊದಲಾಗಿರ್ಪ ಪರಮಾದಾಯ ಸೃಷ್ಟಿಸು ಪಾಲನಾದಿ ಸ್ವ-
ಕೀಯ ಕರ್ಮವ ಮಾಡಿಸುವಿ ನಿನಗಾರುಸರಿಯುಂಟೇ ।
ತೋಯಜಾಲಯೆ ಲೋಕನಾಥಳೆ ತಾಯೆ ಎನ್ನನು ಪೊರೆಯೇ ಎಂದು
ಬಾಯಿ ಬಿಡುವೆನು ಸೋಕನೀಯನ ಜಾಯೆ ಮಾಂ ಪಾಹೀ, ಜಾಯೆ ಮಾಂ ಪಾಹೀ ॥ ೧೪ ॥

ಬೊಮ್ಮ ಎನ್ನಯ ಫಣೆಯ ಫಲಕದಿ ಹಮ್ಮಿನಿಂದಲಿ ಬರೆದ ಲಿಪಿಯನು
ಅಮ್ಮ ಅದನನು ತೊಡೆದು ನೀ ಬ್ಯರಿಬ್ಯಾರೆ ವಿಧದಿಂದ ।
ರಮ್ಯವಾಗಿಹ ನಿನ್ನ ಕರುಣಾ ಹರ್ಮ್ಯದೊಳಗಿರುತಿರ್ಪ ಭಾಗ್ಯವ
ಘಮ್ಮನೆ ದೊರೆವಂತೆ ಈ ಪರಿ ನಿರ್ಮಿಸೋತ್ತಮಳೇ, ನಿರ್ಮಿಸೋತ್ತಮಳೇ ॥ ೧೫ ॥

ಕನಕ ಮುದ್ರಿಕೆ ಪೂರ್ಣ ಕಲಶವ ಎನಗೆ ಅರ್ಪಿಸು ಜನುಮ ಜನುಮದಿ
ಜನನಿ ಭಾಗ್ಯದಭಿಮಾನಿ ನಿನಗಭಿನಮಿಸಿ ಬಿನ್ನೈಪೆ ।
ಕನಸಿಲಾದರು ಭಾಗ್ಯ ಹೀನನು ಎನಿಸಬಾರದು ಎನ್ನ ಲೋಕದಿ
ಎನಿಸು ಭಾಗ್ಯದ ನಿಧಿಯು ಪರಿ ಪರಿ ಉಣಿಸು ಸುಖಫಲವ, ಒಣಿಸು ಸುಖಫಲವ ॥ ೧೬ ॥

ದೇವಿ ನಿನ್ನಯ ಕಳೆಗಳಿಂದಲಿ ಜೀವಿಸುವುದೀ ಜಗವು ನಿತ್ಯದಿ
ಭಾವಿಸೀಪರಿ ಎನಗೆ ಸಂತತ ನಿಖಿಲ ಸಂಪದವ ।
ದೇವಿ ರಮ್ಯ ಮುಖಾರವಿಂದಳೆ ನೀ ಒಲಿದು ಸೌಭಾಗ್ಯ ಪಾಲಿಸು
ಸೇವಕಾಧಮನೆಂದು ಬ್ಯಾಗನೆ ಒಲಿಯೇ ನೀ ಎನಗೆ, ಅಮ್ಮಾ, ಒಲಿಯೇ ನೀ ಎನಗೆ ॥ ೧೭ ॥

ಹರಿಯ ಹೃದಯದಿ ನೀನೆ ನಿತ್ಯದಿ ಇರುವ ತೆರದಲಿ ನಿನ್ನ ಕಳೆಗಳು
ಇರಲಿ ಎನ್ನಯ ಹೃದಯ ಸದನದಿ ಸರ್ವಕಾಲದಲಿ ।
ನಿರುತ ನಿನ್ನಯ ಭಾಗ್ಯ ಕಳೆಗಳು ಬೆರೆತು ಸುಖಗಳ ಸಲಿಸಿ ಸಲಹಲಿ
ಸಿರಿಯೆ ಶ್ರೀಹರಿ ರಾಣಿ ಸರಸಿಜ ನಯನೆ ಕಲ್ಯಾಣಿ, ಸರಸಿಜ ನಯನೆ ಕಲ್ಯಾಣಿ ॥ ೧೮ ॥

ಸರ್ವ ಸೌಖ್ಯ ಪ್ರದಾಯಿ ದೇವಿಯೆ ಸರ್ವ ಭಕ್ತರಿಗಭಯ ದಾಯಿಯೆ
ಸರ್ವ ಕಾಲದಲಚಲ ಕಳೆಗಳ ನೀಡು ಎನ್ನಲ್ಲಿ ।
ಸರ್ವ ಜಗದೊಳು ಘನ್ನ ನಿನ್ನಯ ಸರ್ವ ಸುಕಳಾ ಪೂರ್ಣನೆನಿಸಿ
ಸರ್ವ ವಿಭವದಿ ಮೆರೆಸು ಸಂತತ ವಿಘ್ನವಿಲ್ಲದಲೇ , ವಿಘ್ನವಿಲ್ಲದಲೇ ॥ ೧೯ ॥

ಮುದದಿ ಎನ್ನಯ ಫಾಲದಲಿ ಸಿರಿ ಪದುಮೆ ನಿನ್ನಯ ಪರಮ ಕಳೆಯೂ
ಒದಗಿ ಸರ್ವದಾ ಇರಲಿ ಶ್ರೀ ವೈಕುಂಠ ಗತ ಲಕ್ಷ್ಮೀ ।
ಉದಯವಾಗಲಿ ನೇತ್ರಯುಗಳದಿ ಸದಯ ಮೂರ್ತಿಯೆ ಸತ್ಯಲೋಕದ
ಚದುರೆ ಲಕುಮಿಯೆ ಕಳೆಯು ವಾಕ್ಯದಿ ನಿಲಿಸಲನವರತ, ನಿಲಿಸಲನವರತ ॥ ೨೦ ॥

ಶ್ವೇತ ದಿವಿಯೊಳಗಿರುವ ಲಕುಮಿಯೆ ನೀತವಾಗಿಹ ಕಳೆಯು ನಿತ್ಯದಿ
ಮಾತೆ ಎನ್ನಯ ಕರದಿ ಸಂತತ ವಾಸವಾಗಿರಲಿ ।
ಪಾಥೋ ನಿಧಿಯೊಳಗಿರ್ಪ ಲಕುಮಿಯೆ ಜಾತಕಳೆಯು ಮಮಾಂಗದಲಿ ಸಂ-
ಪ್ರೀತಿ ಪೂರ್ವಕವಿರಲಿ ಸರ್ವದಾ ಪಾಹೀ ಮಾಂ ಪಾಹೀ, ಪಾಹೀ ಮಾಂ ಪಾಹೀ ॥ ೨೧ ॥

ಇಂದು ಸೂರ್ಯರು ಎಲ್ಲಿ ತನಕ ಕುಂದದಲೆ ತಾವಿರುವರೋ ಸಿರಿ
ಇಂದಿರೇಶನು ಯಾವ ಕಾಲದ ತನಕ ಇರುತಿರ್ಪ ।
ಇಂದಿರಾತ್ಮಕ ಕಳೆಯ ರೂಪಗಳಂದಿನದ ಪರಿ ಅಂತರಿರ್ಪವು
ಕುಂದು ಇಲ್ಲದೆ ಎನ್ನ ಬಳಿಯಲಿ ತಾವೆ ನೆಲಸಿರಲಿ, ತಾವೆ ನೆಲಸಿರಲಿ ॥ ೨೨ ॥

ಸರ್ವಮಂಗಳೆ ಸುಗುಣ ಪೂರ್ಣಳೆ ಸರ್ವ ಐಶ್ವರ್ಯಾದಿಮಂಡಿತೆ
ಸರ್ವ ದೇವಗಣಾಭಿವಂದ್ಯಳೆ ಆದಿಮಹಾಲಕ್ಷ್ಮೀ ।
ಸರ್ವಕಳೆ ಸಂಪೂರ್ಣೆ ನಿನ್ನಯ ಸರ್ವಕಳೆಗಳು ಎನ್ನ ಹೃದಯದಿ
ಸರ್ವಕಾಲದಲಿರಲಿ ಎಂದು ನಿನ್ನ ಪ್ರಾರ್ಥಿಸುವೆ, ನಿನ್ನ ಪ್ರಾರ್ಥಿಸುವೆ ॥ ೨೩ ॥

ಜನನೀ ಎನ್ನ ಅಜ್ಞಾನ ತಿಮಿರವ ದಿನದಿನದಿ ಸಂಹರಿಸಿ ನಿನ್ನವ-
ನೆನಿಸಿ ಧ್ಯಾನವ ಮಾಳ್ಪ ನಿರ್ಮಲ ಜ್ಞಾನ ಸಂಪದವಾ ।
ಕನಕ ಮಣಿ ಧನ ಧಾನ್ಯ ಭಾಗ್ಯವ ಇನಿತು ನೀ ಎನಗಿತ್ತು ಪಾಲಿಸು
ಮಿನುಗುತಿಹ ಘನವಾದ ನಿನ್ನಯ ಕಳೆಯು ಶೋಭಿಸಲಿ, ನಿನ್ನಯ ಕಳೆಯು ಶೋಭಿಸಲಿ ॥ ೨೪ ॥

ನಿರುತ ತಮತತಿ ಹರಿಪ ಸೂರ್ಯನ ತೆರದಿ ಕ್ಷಿಪ್ರದಿ ಹರಿಸಲಕ್ಷ್ಮೀಯ
ಸರಕು ಮಾಡದೆ ತರಿದು ಓಡಿಸು ದುರಿತ ರಾಶಿಗಳಾ ।
ಪರಿಪರಿಯ ಸೌಭಾಗ್ಯ ನಿಧಿಯನು ಹರುಷದಿಂದಲಿ ನೀಡಿ ಎನ್ನನು
ಥರಥರದಿ ಕೃತ ಕೃತ್ಯನಿಳೆಯೊಳಗೆನಿಸು ದಯದಿಂದ, ಎನಿಸು ದಯದಿಂದ ॥ ೨೫ ॥

ಅತುಳ ಮಹದೈಶ್ವರ್ಯ ಮಂಗಳತತಿಯು ನಿನ್ನಯ ಕಳೆಗಳೊಳಗೆ
ವಿತತವಾಗಿ ವಿರಾಜಮಾನದಲಿರ್ಪ ಕಾರಣದೀ ।
ಶ್ರುತಿಯು ನಿನ್ನಯ ಮಹಿಮೆ ತಿಳಿಯದು ಸ್ತುತಿಸಬಲ್ಲೆನೇ ತಾಯೇ ಪೇಳ್ವುದು
ಮತಿವಿಹೀನನು ನಿನ್ನ ಕರುಣಕೆ ಪಾತ್ರನೆನಿಸಮ್ಮ, ಕರುಣಕೆ ಪಾತ್ರನೆನಿಸಮ್ಮ ॥ ೨೬ ॥

ನಿನ್ನ ಮಹಾದಾವೇಶ ಭಾಗ್ಯಕೆ ಎನ್ನ ಅರ್ಹನ ಮಾಡು ಲಕುಮಿಯೆ
ಘನ್ನತರ ಸೌಭಾಗ್ಯ ನಿಧಿ ಸಂಪನ್ನನೆನಿಸೆನ್ನ ।
ರನ್ನೆ ನಿನ್ನಯ ಪಾದಕಮಲವ ಮನ್ನದಲಿ ಸಂಸ್ತುತಿಸಿ ಬೇಡುವೆ
ನಿನ್ನ ಪರತರ ಕರುಣ ಕವಚವ ತೊಡಿಸಿ ಪೊರೆಯಮ್ಮ, ಕವಚವ ತೊಡಿಸಿ ಪೊರೆಯಮ್ಮ ॥ ೨೭ ॥

ಪೂತ ನರನನು ಮಾಡಿ ಕಳೆಗಳ ವ್ರಾತದಿಂದಲಿ ಎನ್ನ ನಿಷ್ಠವ
ಘಾತಿಸೀಗಲೆ ಎನಗೆ ಒಲಿದು ಬಂದು ಸುಳಿ ಮುಂದೆ ।
ಮಾತೆ ಭಾರ್ಗವಿ ಕರುಣಿ ನಿನ್ನಯ ನಾಥನಿಂದೊಡಗೂಡಿ ಸಂತತ
ಪ್ರೀತಳಾಗಿರು ಎನ್ನ ಮನೆಯೊಳು ನಿಲ್ಲು ನೀ ಬಿಡದೇ, ಮನೆಯೊಳು ನಿಲ್ಲು ನೀ ಬಿಡದೇ ॥ ೨೮ ॥

ಪರಮಸಿರಿ ವೈಕುಂಠ ಲಕುಮಿಯೆ ಹರಿಯ ಸಹಿತದಲೆನ್ನ ಮುಂದಕೆ
ಹರುಷ ಪಡುತಲಿ ಬಂದು ಶೋಭಿಸು ಕಾಲ ಕಳೆಯದಲೇ ।
ವರದೆ ನಾ ಬಾರೆಂದು ನಿನ್ನನು ಕರೆದೆ ಮನವನು ಮುಟ್ಟಿ ಭಕುತಿಯ
ಭರದಿ ಬಾಗಿದ ಶಿರದಿ ನಮಿಸುವೆ ಕೃಪೆಯ ಮಾಡೆಂದು, ಕೃಪೆಯ ಮಾಡೆಂದು ॥ ೨೯ ॥

ಸತ್ಯಲೋಕದ ಲಕುಮಿ ನಿನ್ನಯ ಸತ್ಯ ಸನ್ನಿಧಿ ಎನ್ನ ಮನೆಯಲಿ
ನಿತ್ಯ ನಿತ್ಯದಿ ಪೆರ್ಚಿ ಹಬ್ಬಲಿ ಜಗದಿ ಜನತತಿಗೇ ।
ಅತ್ಯಧಿಕ ಆಶ್ಚರ್ಯ ತೋರಿಸಿ ಮರ್ತ್ಯರೋತ್ತಮನೆನಿಸಿ ನೀ ಕೃತ
ಕೃತ್ಯನೀಪರಿ ಮಾಡಿ ಸಿರಿ ಹರಿಗೂಡಿ ನಲಿದಾಡೇ, ಹರಿಗೂಡಿ ನಲಿದಾಡೇ ॥ ೩೦ ॥

ಕ್ಷೀರವಾರಿಧಿ ಲಕುಮಿಯೇ ಪತಿನಾರಸಿಂಹನ ಕೂಡಿ ಬರುವುದು
ದೂರ ನೋಡದೆ ಸಾರೆಗೆರೆದು ಪ್ರಸಾದ ಕೊಡು ಎನಗೆ ।
ವಾರಿಜಾಕ್ಷಿಯೆ ನಿನ್ನ ಕರುಣಾಸಾರ ಪೂರ್ಣ ಕಟಾಕ್ಷದಿಂದಲಿ
ಬಾರಿ ಬಾರಿಗೆ ನೋಡಿ ಪಾಲಿಸು ಪರಮ ಪಾವನ್ನೇ, ಪರಮ ಪಾವನ್ನೇ ॥ ೩೧ ॥

ಶ್ವೇತ ದ್ವೀಪದ ಲಕುಮಿ ತ್ರಿಜಗನ್ಮಾತೆ ನೀ ಎನ್ನ ಮುಂದೆ ಶೀಘ್ರದಿ
ನಾಥನಿಂದೊಡಗೂಡಿ ಬಾರೆ ಪ್ರಸನ್ನ ಮುಖ ಕಮಲೇ ।
ಜಾತರೂಪ ಸುತೇಜರೂಪಳೆ ಮಾತರಿಶ್ವ ಮುಖಾರ್ಚಿತಾಂಘ್ರಿಯೆ
ಜಾತರೂಪೋದರಾಂಡ ಸಂಘಕೆ ಮಾತೆ ಪ್ರಖ್ಯಾತೆ, ಮಾತೆ ಪ್ರಖ್ಯಾತೆ ॥ ೩೨ ॥

ರತ್ನಗರ್ಭನ ಪುತ್ರಿ ಲಕುಮಿಯೆ ರತ್ನಪೂರಿತ ಭಾಂಡ ನಿಚಯವ
ಯತ್ನಪೂರ್ವಕ ತಂದು ಎನ್ನಯ ಮುಂದೆ ನೀ ನಿಲ್ಲು ।
ರತ್ನಖಚಿತ ಸುವರ್ಣಮಾಲೆಯ ರತ್ನಪದಕದ ಹಾರ ಸಮುದಯ
ಜತ್ನದಿಂದಲಿ ನೀಡಿ ಸರ್ವದಾ ಪಾಹೀ ಪರಮಾಪ್ತೆ, ಪಾಹೀ ಪರಮಾಪ್ತೆ ॥ ೩೩ ॥

ಎನ್ನ ಮನೆಯಲಿ ಸ್ಥೈರ್ಯದಿಂದಲಿ ಇನ್ನು ನಿಶ್ಚಲಳಾಗಿ ನಿಂತಿರು
ಉನ್ನತಾದೈಶ್ವರ್ಯ ವೃದ್ಧಿಯಗೈಸು ನಿರ್ಮಲಳೇ ।
ಸನ್ನುತಾಂಗಿಯೇ ನಿನ್ನ ಸ್ತುತಿಪೆ ಪ್ರಸನ್ನ ಹೃದಯದಿ ನಿತ್ಯ ನೀ ಪ್ರಹ–
ಸನ್ಮುಖದಿ ಮಾತಾಡು ವರಗಳ ನೀಡಿ ನಲಿದಾಡು, ನೀಡಿ ನಲಿದಾಡು ॥ ೩೪ ॥

ಸಿರಿಯೆ ಸಿರಿ ಮಹಾಭೂತಿ ದಾಯಿಕೆ ಪರಮೆ ನಿನ್ನೊಳಗಿರ್ಪ ಸುಮಹ-
ತ್ತರನವಾತ್ಮಕ ನಿಧಿಗಳೂರ್ಧ್ವಕೆ ತಂದು ಕರುಣದಲಿ ।
ಕರದಿ ಪಿಡಿದದನೆತ್ತಿ ತೋರಿಸಿ ತ್ವರದಿ ನೀ ಎನಗಿತ್ತು ಪಾಲಿಸು
ಧರಣಿ ರೂಪಳೆ ನಿನ್ನ ಚರಣಕೆ ಶರಣು ನಾ ಮಾಳ್ಪೆ, ಶರಣು ನಾ ಮಾಳ್ಪೆ ॥ ೩೫ ॥

ವಸುಧೆ ನಿನ್ನೊಳಗಿರ್ಪ ವಸುವನು ವಶವ ಮಾಳ್ಪುದು ಎನಗೆ ಸರ್ವದಾ
ವಸುಸುದೋಗ್ಧ್ರಿಯು ಎಂಬ ನಾಮವು ನಿನಗೆ ಇರುತಿಹುದು
ಅಸಮ ಮಹಿಮಳೆ ನಿನ್ನ ಶುಭತಮ ಬಸುರಿನೊಳಗಿರುತಿರ್ಪ ನಿಧಿಯನು
ಬೆಸೆಸು ಈಗಲೇ ಹಸಿದು ಬಂದಗೆ ಅಶನವಿತ್ತಂತೇ, ಅಶನವಿತ್ತಂತೇ ॥ ೩೬ ॥

ಹರಿಯ ರಾಣಿಯೆ ರತ್ನಗರ್ಭಳೆ ಸರಿಯು ಯಾರೀ ಸುರರ ಸ್ತೋಮದಿ
ಸರಸಿಜಾಕ್ಷಿಯೆ ನಿನ್ನ ಬಸಿರೊಳಗಿರುವ ನವನಿಧಿಯಾ ।
ಮೆರೆವ ಹೇಮದ ಗಿರಿಯ ತೆರದಲಿ ತೆರೆದು ತೋರಿಸಿ ಸಲಿಸು ಎನಗೆ
ಪರಮ ಕರುಣಾಶಾಲಿ ನಮೋ ನಮೋ ಎಂದು ಮೊರೆ ಹೊಕ್ಕೆ, ನಮೋ ನಮೋ ಎಂದು ಮೊರೆಹೊಕ್ಕೆ ॥ ೩೭ ॥

ರಸತಳದ ಸಿರಿ ಲಕುಮಿದೇವಿಯೆ ಶಶಿ ಸಹೋದರಿ ಶೀಘ್ರದಿಂದಲಿ
ಅಸಮ ನಿನ್ನಯ ರೂಪ ತೋರಿಸು ಎನ್ನ ಪುರದಲ್ಲಿ ।
ಕುಸುಮಗಂಧಿಯೇ ನಿನ್ನನರಿಯೆನು ವಸುಮತೀ ತಳದಲ್ಲಿ ಬಹುಪರಿ
ಹೊಸತು ಎನಿಪುದು ನಿನ್ನ ಒಲುಮೆಯು ಸಕಲ ಜನತತಿಗೆ, ಸಕಲ ಜನತತಿಗೆ ॥ ೩೮ ॥

ನಾಗವೇಣಿಯೆ ಲಕುಮಿ ನೀ ಮನೋವೇಗದಿಂದಲಿ ಬಂದು ಎನ್ನಯ
ಜಾಗುಮಾಡದೆ ಶಿರದಿ ಹಸ್ತವನಿಟ್ಟು ಮುದದಿಂದ ।
ನೀಗಿಸೀ ದಾರಿದ್ರ್ಯ ದುಃಖವ ಸಾಗಿಸೀ ಭವಭಾರ ಪರ್ವತ
ತೂಗಿಸು ನೀ ಎನ್ನ ಸದನದಿ ಕನಕ ಭಾರಗಳಾ, ಕನಕ ಭಾರಗಳಾ ॥ ೩೯ ॥

ಅಂಜಬೇಡವೋ ವತ್ಸಾ ಎನುತಲಿ ಮಂಜುಳೋಕ್ತಿಯ ನುಡಿದು ಕರುಣಾ -
ಪುಂಜ ಮನದಲಿ ಬಂದು ಶೀಘ್ರದಿ ಕಾರ್ಯ ಮಾಡುವುದು ।
ಕಂಜಲೋಚನೆ ಕಾಮಧೇನು ಸುರಂಜಿಪಾಮರ ತರುವು ಎನಿಸುವಿ
ಸಂಜಯಪ್ರದಳಾಗಿ ಸಂತತ ಪಾಹೀ ಮಾಂ ಪಾಹೀ, ಪಾಹೀ ಮಾಂ ಪಾಹೀ ॥ ೪೦ ॥

ದೇವಿ ಶೀಘ್ರದಿ ಬಂದು ಭೂಮಿದೇವಿ ಸಂಭವೆ ಎನ್ನ ಜನನಿಯೆ
ಕಾಮನಯ್ಯನ ರಾಣಿ ನಿನ್ನಯ ಭೃತ್ಯ ನಾನೆಂದು ।
ಭಾವಿಸೀಪರಿ ನಿನ್ನ ಹುಡುಕಿದೆ ಸೇವೆ ನೀ ಕೈಕೊಂಡು ಮನ್ಮನೋ
ಭಾವ ಪೂರ್ತಿಸಿ ಕರುಣಿಸೆನ್ನನು ಶರಣು ಶರಣೆಂಬೇ, ಶರಣು ಶರಣೆಂಬೇ ॥ ೪೧ ॥

ಜಾಗರೂಕದಿ ನಿಂತು ಮತ್ತೇ ಜಾಗರೂಕದಿ ಎನಗೆ ನಿತ್ಯದಿ
ತ್ಯಾಗಭೋಗ್ಯಕೆ ಯೋಗ್ಯವೆನಿಪಾಕ್ಷಯ್ಯ ಹೇಮಮಯ ।
ಪೂಗ ಕನಕ ಸಂಪೂರ್ಣ ಘಟಗಳ ಯೋಗ ಮಾಳ್ಪುದು ಲೋಕಜನನೀ
ಈಗ ಎನ್ನಯ ಭಾರ ನಿನ್ನದು ಕರೆದು ಕೈ ಪಿಡಿಯೇ, ಅಮ್ಮಾ ಕರೆದು ಕೈ ಪಿಡಿಯೇ ॥ ೪೨ ॥

ಧರಣಿಗತ ನಿಕ್ಷೇಪಗಳನುದ್ಧರಿಸಿ ನೀ ಎನ್ನ ಮುಂದೆ ಸೇರಿಸಿ
ಕಿರಿಯ ನಗೆಮೊಗದಿಂದ ನೋಡುತ ನೀಡು ನವನಿಧಿಯ ।
ಸ್ಥಿರದಿ ಎನ್ನ ಮಂದಿರದಿ ನಿಂತು ಪರಮ ಮಂಗಳಕಾರ್ಯ ಮಾಡಿಸು
ಸಿರಿಯೆ ನೀನೆ ಒಲಿದು ಪಾಲಿಸು ಮೋಕ್ಷ ಸುಖ ಕೊನೆಗೆ, ಮೋಕ್ಷ ಸುಖ ಕೊನೆಗೆ ॥ ೪೩ ॥

ನಿಲ್ಲೇ ಲಕುಮೀ ಸ್ಥೈರ್ಯ ಭಾವದಿ ನಿಲ್ಲು ರತ್ನ ಹಿರಣ್ಯ ರೂಪಳೆ
ಎಲ್ಲ ವರಗಳನಿತ್ತು ನನಗೆ ಪ್ರಸನ್ನಮುಖಳಾಗು
ಎಲ್ಲೋ ಇರುತಿಹ ಕನಕ ನಿಧಿಗಳನೆಲ್ಲ ನೀ ತಂದು ನೀಡುವುದೈ
ಪುಲ್ಲಲೋಚನೆ ತೋರಿ ನಿಧಿಗಳ ತಂದು ಪೊರೆಯಮ್ಮ , ತಂದು ಪೊರೆಯಮ್ಮ ॥ ೪೪ ॥

ಇಂದ್ರಲೋಕದಲಿದ್ದ ತೆರದಲಿ ನಿಂದ್ರು ಎನ್ನಯ ಗೃಹದಿ ನಿತ್ಯದಿ
ಚಂದ್ರವದನೆಯೆ ಲಕುಮಿ ದೇವಿ ನೀಡೆ ಎನಗಭಯಾ ।
ನಿಂದ್ರಲಾರೆನು ಋಣದ ಬಾಧೆಗೆ ತಂದ್ರಮತಿ ನಾನಾದೆ ಭವದೊಳು-
ಪೇಂದ್ರ ವಲ್ಲಭೆ ಅಭಯ ಪಾಲಿಸು ನಮಿಪೆ ಮಜ್ಜನನೀ, ನಮಿಪೆ ಮಜ್ಜನನೀ ॥ ೪೫ ॥

ಬದ್ಧ ಸ್ನೇಹ ವಿರಾಜಮಾನಳೆ ಶುದ್ಧ ಜಾಂಬೂನದದಿ ಸಂಸ್ಥಿತೆ
ಮುದ್ದು ಮೋಹನ ಮೂರ್ತಿ ಕರುಣದಿ ನೋಡೆ ನೀ ಎನ್ನ ।
ಬಿದ್ದೆ ನಾ ನಿನ್ನ ಪಾದ ಪದುಮಕೆ ಉದ್ಧರಿಪುದೆಂದು ಬೇಡಿದೇ ಅನಿ-
ರುದ್ಧ ರಾಣಿ ಕೃಪಾಕಟಾಕ್ಷದಿ ನೋಡೆ ಮಾತಾಡೇ, ನೋಡೆ ಮಾತಾಡೇ ॥ ೪೬ ॥

ಭೂಮಿ ಗತ ಸಿರಿದೇವಿ ಶೋಭಿತೆ ಹೇಮಮಯೆ ಎಲ್ಲೆಲ್ಲು ಇರುತಿಹೆ
ತಾಮರಸ ಸಂಭೂತೆ ನಿನ್ನಯ ರೂಪ ತೋರೆನಗೆ ।
ಭೂಮಿಯಲಿ ಬಹು ರೂಪದಿಂದಲಿ ಪ್ರೇಮಪೂರ್ವಕ ಕ್ರೀಡೆಗೈಯ್ಯುತ
ಹೇಮಮಯ ಪರಿಪೂರ್ಣ ಹಸ್ತವ ಶಿರದ ಮೇಲಿರಿಸು, ಹಸ್ತವ ಶಿರದ ಮೇಲಿರಿಸು ॥ ೪೭ ॥

ಫಲಗಳೀವ ಸುಭಾಗ್ಯ ಲಕುಮಿಯೆ ಲಲಿತ ಸರ್ವ ಪುರಾಧಿ ವಾಸಿಯೆ
ಕಲುಷ ಶೂನ್ಯಳೆ ಲಕುಮಿ ದೇವಿಯೆ ಪೂರ್ಣ ಮಾಡೆನ್ನ ।
ಕುಲಜೆ ಕುಂಕುಮ ಶೋಭಿಪಾಲಳೆ ಚಲಿತ ಕುಂಡಲ ಕರ್ಣ ಭೂಷಿತೆ
ಜಲಜಲೋಚನೆ ಜಾಗ್ರ ಕಾಲದಿ ಸಲಿಸು ಎನಗಿಷ್ಟ, ಸಲಿಸು ಎನಗಿಷ್ಟ ॥ ೪೮ ॥

ತಾಯೆ ಚೆಂದದಲಂದಯೋಧ್ಯದಿ ದಯದಿ ನೀನೆ ನಿಂತು ಪಟ್ಟಣ-
ಭಯವ ಓಡಿಸಿ ಜಾಗು ಮಾಡದೆ ಮತ್ತೆ ಮುದದಿಂದ ।
ಜಯವ ನೀಡಿದ ತೆರದಿ ಎನ್ನಾಲಯದಿ ಪ್ರೇಮದಿ ಬಂದು ಕೂಡ್ವದು
ಜಯಪ್ರದಾಯಿನಿ ವಿವಿಧ ವೈಭವದಿಂದ ಒಡಗೂಡಿ, ವೈಭವದಿಂದ ಒಡಗೂಡಿ ॥ ೪೯ ॥

ಬಾರೆ ಲಕುಮಿ ಎನ್ನ ಸದನಕೆ ಸಾರಿದೆನು ತವ ಪಾದ ಪದುಮಕೆ
ತೋರಿ ಎನ್ನಯ ಗೃಹದಿ ನೀನೆ ಸ್ಥಿರದಿ ನೆಲೆಸಿದ್ದು ।
ಸಾರ ಕರುಣಾರಸವು ತುಂಬಿದ ಚಾರುಜಲರುಹ ನೇತ್ರಯುಗ್ಮಳೆ
ಪಾರುಗಾಣಿಸು ಪರಮ ಕರುಣಿಯೆ ರಿಕ್ತತನದಿಂದ, ರಿಕ್ತತನದಿಂದ ॥ ೫೦ ॥

ಸಿರಿಯೆ ನಿನ್ನಯ ಹಸ್ತ ಕಮಲವ ಶಿರದಿ ನೀನೇ ಇರಿಸಿ ಎನ್ನನು
ಕರುಣವೆಂಬಾಮೃತದ ಕಣದಲಿ ಸ್ನಾನಗೈಸಿನ್ನು ।
ಸ್ಥಿರದಿ ಸ್ಥಿತಿಯನು ಮಾಡು ಸರ್ವದಾ ಸರ್ವ ರಾಜ ಗೃಹಸ್ಥ ಲಕುಮಿಯೆ
ತ್ವರದಿ ಮೋದದಿ ಯುಕ್ತಳಾಗಿರು ಎನ್ನ ಮುಂದಿನ್ನು, ಎನ್ನ ಮುಂದಿನ್ನು ॥ ೫೧ ॥

ನೀನೆ ಆಶೀರ್ವದಿಸಿ ಅಭಯವ ನೀನೆ ಎನಗೆ ಇತ್ತು ಸಾದರ
ನೀನೆ ಎನ್ನ ಶಿರದಲಿ ಹಸ್ತವ ಇರಿಸು ಕರುಣದಲಿ ।
ನೀನೆ ರಾಜರ ಗೃಹದ ಲಕ್ಷ್ಮೀಯು ನೀನೆ ಸರ್ವ ಸುಭಾಗ್ಯ ಲಕ್ಷ್ಮೀಯು
ಹೀನವಾಗದೆ ನಿನ್ನ ಕಳೆಗಳ ವೃದ್ಧಿ ಮಾಡಿನ್ನು, ವೃದ್ಧಿ ಮಾಡಿನ್ನು ॥ ೫೨ ॥

ಆದಿ ಸಿರಿ ಮಹಾಲಕುಮಿ ವಿಷ್ಣುವಿನವೋದಮಯ ವಾಮಾಂಕ ನಿನಗನು-
ವಾದ ಸ್ವಸ್ಥಳವೆಂದು ತಿಳಿದು ನೀನೆ ನೆಲೆಸಿದ್ದೀ ।
ಆದಿ ದೇವಿಯೆ ನಿನ್ನ ರೂಪವ ಮೋದದಿಂದಲಿ ತೋರಿ ಎನ್ನೊಳು
ಕ್ರೋಧವಿಲ್ಲದೆ ನಿತ್ಯ ಎನ್ನನು ಪೊರೆಯೆ ಕರುಣದಲಿ, ಪೊರೆಯೆ ಕರುಣದಲಿ ॥ ೫೩ ॥

ಒಲಿಯೆ ನೀ ಮಹಾಲಕುಮಿ ಬೇಗನೆ ಒಲಿಯೆ ಮಂಗಳಮೂರ್ತಿ ಸರ್ವದಾ
ನಲಿಯೆ ಚಲಿಸದೆ ಹೃದಯ ಮಂದಿರದಲ್ಲಿ ನೀನಿರುತ ।
ಲಲಿತವೇದಗಳೆಲ್ಲಿ ತನಕ ತಿಳಿದು ಹರಿಗುಣ ಪಾಡುತಿರ್ಪುವು
ಜಲಜಲೋಚನ ವಿಷ್ಣು ನಿನ್ನೊಳು ಅಲ್ಲಿ ನೀನಿರ್ಪೆ, ಅಲ್ಲಿ ನೀನಿರ್ಪೆ ॥ ೫೪ ॥

ಅಲ್ಲಿ ಪರಿಯಂತರದಿ ನಿನ್ನಯ ಎಲ್ಲ ಕಳೆಗಳು ಎನ್ನ ಮನೆಯಲಿ
ನಿಲ್ಲಿಸೀ ಸುಖ ವ್ರಾತ ನೀಡುತ ಸರ್ವಕಾಲದಲಿ ।
ಎಲ್ಲ ಜನಕಾಹ್ಲಾದ ಚಂದಿರ ಕುಲ್ಲದೇ ಶುಭ ಪಕ್ಷ ದಿನದೊಳು
ನಿಲ್ಲದಲೇ ಕಳೆ ವೃದ್ಧಿಯೈದುವ ತೆರದಿ ಮಾಡೆನ್ನ, ತೆರದಿ ಮಾಡೆನ್ನ ॥ ೫೫ ॥

ಸಿರಿಯೆ ನೀ ವೈಕುಂಠ ಲೋಕದಿ ಸಿರಿಯೆ ನೀ ಪಾಲ್ಗಡಲ ಮಧ್ಯದಿ
ಇರುವ ತೆರದಲಿ ಎನ್ನ ಮನೆಯೊಳು ವಿಷ್ಣು ಸಹಿತಾಗಿ
ನಿರುತ ಜ್ಞಾನಿಯ ಹೃದಯ ಮಧ್ಯದಿ ಮಿರುಗುವಂದದಲೆನ್ನ ಸದನದಿ
ಹರಿಯ ಸಹಿತದಿ ನಿತ್ಯ ರಾಜಿಸು ನೀಡಿ ಕಾಮಿತವಾ, ನೀಡಿ ಕಾಮಿತವಾ ॥ ೫೬ ॥

ಶ್ರೀನಿವಾಸನ ಹೃದಯ ಕಮಲದಿ ನೀನೆ ನಿಂತಿರುವಂತೆ ಸರ್ವದಾ
ಆ ನಾರಾಯಣ ನಿನ್ನ ಹೃದಯದಿ ಇರುವ ತೆರದಂತೆ ।
ನೀನು ನಾರಾಯಣನು ಇಬ್ಬರು ಸಾನುರಾಗದಿ ಎನ್ನ ಮನದೊಳು
ನ್ಯೂನವಾಗದೆ ನಿಂತು ಮನೋರಥ ಸಲಿಸಿ ಪೊರೆಯೆಂದೆ, ಮನೋರಥ ಸಲಿಸಿ ಪೊರೆಯೆಂದೆ ॥ ೫೭ ॥

ವಿಮಲತರ ವಿಜ್ಞಾನ ವೃದ್ಧಿಯ ಕಮಲೆ ಎನ್ನಯ ಮನದಿ ಮಾಳ್ಪುದು
ಅಮಿತ ಸುಖ ಸೌಭಾಗ್ಯ ವೃದ್ಧಿಯ ಮಾಡು ಮಂದಿರದಿ ।
ರಮೆಯೆ ನಿನ್ನಯ ಕರುಣ ವೃದ್ಧಿಯ ಸುಮನದಿಂದಲಿ ಮಾಡು ಎನ್ನಲಿ
ಅಮರಪಾದಪೆ ಸ್ವರ್ಣವೃಷ್ಟಿಯ ಮಾಡು ಮಂದಿರದಿ, ವೃಷ್ಟಿಯ ಮಾಡು ಮಂದಿರದಿ ॥ ೫೮ ॥

ಎನ್ನ ತ್ಯಜನವ ಮಾಡದಿರು ಸುರರನ್ನೆ ಆಶ್ರಿತ ಕಲ್ಪಭೂಜಳೆ
ಮುನ್ನ ಭಕ್ತರ ಚಿಂತಾಮಣಿ ಸುರಧೇನು ನೀನಮ್ಮ ।
ಘನ್ನ ವಿಶ್ವದ ಮಾತೆ ನೀನೆ ಪ್ರಸನ್ನಳಾಗಿರು ಎನ್ನ ಭವನದಿ
ಸನ್ನುತಾಂಗಿಯೇ ಪುತ್ರ ಮಿತ್ರ ಕಳತ್ರ ಜನ ನೀಡೆ, ಕಳತ್ರ ಜನ ನೀಡೆ ॥ ೫೯ ॥

ಆದಿ ಪ್ರಕೃತಿಯೆ ಬೊಮ್ಮನಾಂಡಕೆ ಆದಿ ಸ್ಥಿತಿಲಯ ಬೀಜ ಭೂತಳೆ
ಮೋದ ಚಿನ್ಮಯ ಗಾತ್ರೆ ಪ್ರಾಕೃತ ದೇಹ ವರ್ಜಿತಳೇ ।
ವೇದವೇದ್ಯಳೆ ಬೊಮ್ಮನಾಂಡವ ಆದಿಕೂರ್ಮದ ರೂಪದಿಂದಲಿ ಅ-
ನಾದಿಕಾಲದಿ ಪೊತ್ತು ಮೆರೆವದು ಏನು ಚಿತ್ರವಿದು, ಏನು ಚಿತ್ರವಿದು ॥ ೬೦ ॥

ವೇದ ಮೊದಲು ಸಮಸ್ತ ಸುರರು ವೇದ ಸ್ತೋಮಗಳಿಂದ ನಿನ್ನ ಅ-
ಗಾಧ ಮಹಿಮೆಯ ಪೊಗಳಲೆಂದರೆ ಶಕ್ತರವರಲ್ಲ
ಓದುಬಾರದ ಮಂದಮತಿ ನಾನಾದ ಕಾರಣ ಶಕ್ತಿಯಿಲ್ಲವು
ಬೋಧದಾಯಕೆ ನೀನೆ ಸ್ತವನವ ಗೈಸು ಎನ್ನಿಂದ, ಗೈಸು ಎನ್ನಿಂದ ॥ ೬೧ ॥

ಮಂದ ನಿಂದಲಿ ಸುಗುಣ ವೃಂದವ ಚಂದದಲಿ ನೀ ನುಡಿಸಿ ಎನ್ನಯ
ಮಂದಮತಿಯನು ತರಿದು ನಿರ್ಮಲ ಜ್ಞಾನಿಯೆಂದೆನಿಸು
ಇಂದಿರೇ ತವ ಪಾದಪದುಮದ ದ್ವಂದ್ವ ಸ್ತುತಿಸುವ ಶಕುತಿ ಇದ್ದು
ಕುಂದು ಬಾರದ ಕವಿತೆ ಪೇಳಿಸು ಎಂದು ವಂದಿಪೆನು, ಎಂದು ವಂದಿಪೆನು ॥ ೬೨ ॥

ವತ್ಸನ್ವಚನವ ಕೇಳೇ ನೀ ಸಿರಿ ವತ್ಸಲಾಂಛನ ವಕ್ಷಮಂದಿರೆ
ತುಚ್ಛ ಮಾಡದೆ ಮನಕೆ ತಂದು ನೀನೆ ಪಾಲಿಪುದು ।
ಸ್ವಚ್ಛವಾಗಿಹ ಸಕಲ ಸಂಪದ ಉತ್ಸಾಹದಿ ನೀ ನೀಡಿ ಮನ್ಮನೋ
ಇಚ್ಛೆ ಪೂರ್ತಿಸು ಜನನಿ ಬೇಡುವೆ ನೀನೆ ಸರ್ವಜ್ಞೆ, ಜನನಿ ನೀನೆ ಸರ್ವಜ್ಞೆ॥ ೬೩ ॥

ನಿನ್ನ ಮೊರೆಯನುಯ್ಯೆದಿ ಪೂರ್ವದಿ ಧನ್ಯರಾದರು ಧರಣಿಯೊಳಗಾ-
ಪನ್ನ ಪಾಲಕೆ ಎಂದು ನಿನ್ನನು ನಂಬಿ ಮೊರಹೊಕ್ಕೆ ।
ನಿನ್ನ ಭಕುತಗನಂತ ಸೌಖ್ಯವು ನಿನ್ನಲೇ ಪರಭಕುತಿ ಅವನಿಗೆ
ನಿನ್ನ ಕರುಣಕೆ ಪಾತ್ರನಾಗುವನೆಂದು ಶ್ರುತಿಸಿದ್ಧ, ಎಂದು ಶ್ರುತಿಸಿದ್ಧ ॥ ೬೪ ॥

ನಿನ್ನ ಭಕುತಗೆ ಹಾನಿ ಇಲ್ಲವು ಬನ್ನ ಬಡಿಸುವರಿಲ್ಲ ಎಂದಿಗು
ಮುನ್ನ ಭವಭಯವಿಲ್ಲವೆಂದಾ ಶ್ರುತಿಯು ಪೇಳುವುದು ।
ಎನ್ನ ಕರುಣಾಬಲವು ಅವನಲಿ ಘನ್ನವಾಗಿ ಇರುವುದೆಂಬ
ನಿನ್ನ ವಚನವ ಕೇಳಿ ಈ ಕ್ಷಣ ಪ್ರಾಣ ಧರಿಸಿಹೆನು, ಪ್ರಾಣ ಧರಿಸಿಹೆನು ॥ ೬೫ ॥

ನಾನು ನಿನ್ನಾಧೀನ ಜನನಿಯೆ ನೀನು ಎನ್ನಲಿ ಕರುಣ ಮಾಳ್ಪುದು
ಹೀನ ಬಡತನ ದೋಷ ಕಳೆದು ನೀನೆ ನೆಲಸಿದ್ದು ।
ಮಾನ ಮನೆ ಧನ ಧಾನ್ಯ ಭಕುತಿ ಜ್ಞಾನ ಸುಖ ವೈರಾಗ್ಯ ಮೂರ್ತಿ
ಧ್ಯಾನ ಮಾನಸ ಪೂಜೆ ಮಾಡಿಸು ನೀನೆ ಎನ್ನಿಂದ, ನೀನೆ ಎನ್ನಿಂದ ॥ ೬೬ ॥

ನಿನ್ನ ಅಂತಃಕರಣದಿಂದಲಿ ಮುನ್ನ ನಾನೇ ಪೂರ್ಣ ಕಾಮನು
ಇನ್ನು ಆಗುವೆ ಪರಮ ಭಕ್ತ ಕುಚೇಲನಂದದಲಿ ।
ಬಿನ್ನೈಪೆ ತವ ಪಾದ ಪದ್ಮಕೆ ಬನ್ನ ನಾ ಬಡಲಾರೆ ದೇವಿ
ಎನ್ನ ನೀ ಕರ ಪಿಡಿದು ಪಾಲಿಸು ರಿಕ್ತತನದಿಂದ, ಪಾಲಿಸು ರಿಕ್ತತನದಿಂದ ॥ ೬೭ ॥

ಕ್ಷಣವೂ ಜೀವಿಸಲಾರೆ ನಿನ್ನಯ ಕರುಣವಿಲ್ಲದೆ ಅವನಿ ತಳದಲಿ
ಕ್ಷಣಿಕ ಫಲಗಳ ಬಯಸಲಾರೆನೆ ಮೋಕ್ಷ ಸುಖ ದಾಯೆ ।
ಗಣನೆ ಮಾಡದೆ ನೀಚ ದೇವರ ಹಣಿದು ಬಿಡುವೀ ಬಾಧೆ ಕೊಟ್ಟರೆ
ಪಣವ ಮಾಡುವೆ ನಿನ್ನ ಬಳಿಯಲಿ ಮಿಥ್ಯವೇನಿಲ್ಲ, ಮಿಥ್ಯವೇನಿಲ್ಲ ॥ ೬೮ ॥

ತನಯನರಿ ವಾತ್ಸಲ್ಯದಿಂದಲಿ ಜನನಿ ಹಾಲಲಿ ತುಂಬಿ ತುಳುಕುವ
ಸ್ತನವನಿತ್ತು ಆದರಿಸಿ ಉಣಿಸುವ ಜನನಿ ತೆರದಂತೆ
ನಿನಗೆ ಸುರರೊಳು ಸಮರ ಕಾಣೆನು ಅನಿಮಿಶೇಷರ ಪಡೆದು ಪಾಲಿಪಿ
ದಿನದಿನದಿ ಸುಖವಿತ್ತು ಪಾಲಿಸು ಕರುಣ ವಾರಿಧಿಯೆ, ಪಾಲಿಸು ಕರುಣ ವಾರಿಧಿಯೆ ॥ ೬೯ ॥

ಏಸು ಕಲ್ಪದಿ ನಿನಗೆ ಪುತ್ರನು ಆಸು ಕಲ್ಪದಿ ಮಾತೆ ನೀನೆ
ಲೇಷವಿದಕನುಮಾನವಿಲ್ಲವು ಸಕಲ ಶ್ರುತಿಸಿದ್ಧ ।
ಲೇಸು ಕರುಣಾಸಾರವೆನಿಸುವ ಸೂಸುವಾಮೃತಧಾರದಿಂದಲಿ
ಸೋಸಿನಿಂದಭಿಷೇಕಗೈದಭಿಲಾಷೆ ಸಲಿಸಮ್ಮ, ಅಭಿಲಾಷೆ ಸಲಿಸಮ್ಮ ॥ ೭೦ ॥

ದೋಷಮಂದಿರನೆನಿಪ ಎನ್ನಲಿ ಲೇಷ ಪುಡಕಲು ಗುಣಗಳಿಲ್ಲ ವಿ-
ಶೇಷ ವೃಷ್ಟಿ ಸುಪಾಂಸು ಕಣಗಳ ಗಣನೆ ಬಹು ಸುಲಭ
ರಾಶಿಯಂದದಲಿಪ್ಪ ಎನ್ನಘ ಸಾಸಿರಾಕ್ಷಗಶಕ್ಯ ಗಣಿಸಲು
ಏಸು ಪೇಳಲಿ ತಾಯೇ ತನಯುನ ತಪ್ಪು ಸಹಿಸಮ್ಮ, ಅಮ್ಮಾ ತಪ್ಪು ಸಹಿಸಮ್ಮ ॥ ೭೧ ॥

ಪಾಪಿಜನರೊಳಗಗ್ರಗಣ್ಯನು ಕೋಪ ಪೂರಿತ ಚಿತ್ತ ಮಂದಿರ
ಈ ಪಯೋಜಭವಾಂಡ ಪುಡುಕಿದರಾರು ಸರಿಯಿಲ್ಲ
ಶ್ರೀಪನರಸಿಯೆ ಕೇಳು ದೋಷವು ಲೋಪವಾಗುವ ತೆರದಿ ಮಾಡಿ
ರಾಪುಮಾಡದೆ ಸಲಹು ಶ್ರೀಹರಿ ರಾಣಿ ಕಲ್ಯಾಣಿ, ಹರಿ ರಾಣಿ ಕಲ್ಯಾಣಿ ॥ ೭೨ ॥

ಕರುಣಶಾಲಿಯರೊಳಗೆ ನೀ ಬಲು ಕರುಣಶಾಲಿಯು ಎಂದು ನಿನ್ನಯ
ಚರಣಯುಗಕಭಿನಮಿಸಿ ಸಾರ್ದೆನು ಪೊರೆಯೆ ಪೊರೆಯೆಂದು ।
ಹರಣ ನಿಲ್ಲದು ಹಣವು ಇಲ್ಲದೆ ಶರಣರನುದಿನ ಪೊರೆವ ದೇವಿ ಸು-
ಪರಣ ವಾಹನ ರಾಣಿ ಎನ್ನನು ಕಾಯೆ ವರವೀಯೇ, ಕಾಯೆ ವರವೀಯೇ ॥ ೭೩ ॥

ಉದರ ಕರ ಶಿರ ಟೊಂಕ ಸೂಲಿಯ ಮೊದಲೇ ಸೃಷ್ಟಿಯಗೈಯ್ಯದಿರಲೌ-
ಷಧದ ಸೃಷ್ಟಿಯು ವ್ಯರ್ಥವಾಗುವ ತೆರದಿ ಜಗದೊಳಗೇ ।
ವಿಧಿಯು ಎನ್ನನು ಸೃಜಿಸದಿದ್ದರೆ ಪದುಮೆ ನಿನ್ನ ದಯಾಳುತನವು
ಪುದುಗಿ ಪೋದಿತು ಎಂದು ತಿಳಿದಾ ಬೊಮ್ಮ ಸೃಜಿಸಿದನು, ಬೊಮ್ಮ ಸೃಜಿಸಿದನು ॥ ೭೪ ॥

ನಿನ್ನ ಕರುಣವು ಮೊದಲು ದೇವಿಯೆ ಎನ್ನ ಜನನವು ಮೊದಲು ಪೇಳ್ವದು
ಮುನ್ನ ಇದನನು ವಿಚಾರಗೈದು ವಿತ್ತ ಎನಗೀಯೇ ।
ಘನ್ನ ಕರುಣಾನಿಧಿಯು ಎನುತಲಿ ಬಿನ್ನಹವ ನಾ ಮಾಡಿ ಯಾಚಿಪೆ
ಇನ್ನು ನಿಧಿಯನು ಇತ್ತು ಪಾಲಿಸು ದೂರ ನೋಡದಲೇ, ದೂರ ನೋಡದಲೇ ॥ ೭೫ ॥

ತಂದೆ ತಾಯಿಯು ನೀನೆ ಲಕುಮಿ ಬಂಧು ಬಳಗವು ನೀನೆ ದೇವಿ
ಹಿಂದೆ ಮುಂದೆ ಎನಗೆ ನೀನೆ ಗುರುವು ಸದ್ಗತಿಯು ।
ಇಂದಿರೆಯೆ ಎನ್ನ ಜೀವ ಕಾರಿಣಿಸಂದೇಹ ಎನಗಿಲ್ಲ ಪರಮಾ-
ನಂದ ಸಮುದಯ ನೀಡೆ ಕರುಣವ ಮಾಡೆ ವರ ನೀಡೆ, ಕರುಣವ ಮಾಡೆ ವರ ನೀಡೆ ॥ ೭೬ ॥

ನಾಥಳೆನಿಸುವಿ ಸಕಲ ಲೋಕಕೆ ಖ್ಯಾತಳೆನಿಸುವೆ ಸರ್ವ ಕಾಲದಿ
ಪ್ರೀತಳಾಗಿರು ಎನಗೆ ಸಕಲವು ನೀನೆ ನಿಜವೆಂದೆ ।
ಮಾತೆ ನೀನೆ ಎನಗೆ ಹರಿ ನಿಜ ತಾತ ಈರ್ವರು ನೀವೆ ಇರಲಿ
ರೀತಿಯಿಂದಲಿ ಭವದಿ ತೊಳಲಿಪುದೇನು ನಿಮ್ಮ ನ್ಯಾಯ, ಇದೇನು ನಿಮ್ಮ ನ್ಯಾಯ ॥ ೭೭ ॥

ಆದಿ ಲಕುಮಿ ಪ್ರಸನ್ನಳಾಗಿರು ಮೋದಜ್ಞಾನ ಸುಭಾಗ್ಯ ಧಾತ್ರಿಯೆ
ಭೇದಿಸಜ್ಞಾನಾದಿ ದೋಷವ ತ್ರಿಗುಣವರ್ಜಿತಳೇ ।
ಸಾದರದಿ ನೀ ಕರೆದು ಕೈ ಪಿಡಿ ಮಾಧವನ ನಿಜ ರಾಣಿ ನಮಿಸುವೆ
ಬಾಧೆ ಗೊಳಿಸುವ ಋಣವ ಕಳೆದು ಸಿರಿಯೆ ಪೊರೆಯೆಂದೆ, ಅಮ್ಮಾ ಸಿರಿಯೆ ಪೊರೆಯೆಂದೆ ॥ ೭೮ ॥

ವಚನಜಾಡ್ಯವ ಕಳೆವ ದೇವಿಯೆ ಎಚೆಯೆ ನೂತನ ಸ್ಪಷ್ಟ ವಾಕ್ಪದ
ನಿಚಯ ಪಾಲಿಸಿ ಎನ್ನ ಜಿಹ್ವಾಗ್ರದಲಿ ನೀ ನಿಂತು ।
ರಚನೆ ಮಾಡಿಸು ಎನ್ನ ಕವಿತೆಯ ಪ್ರಚುರವಾಗುವ ತೆರದಿ ಮಾಳ್ಪುದು
ಉಚಿತವೇ ಸರಿಯೇನು ಪೇಳ್ವುದು ತಿಳಿಯೆ ಸರ್ವಜ್ಞೆ, ಲಕ್ಷ್ಮೀ ತಿಳಿಯೆ ಸರ್ವಜ್ಞೆ॥ ೭೯ ॥

ಸರ್ವ ಸಂಪದದಿಂದ ರಾಜಿಪೆ ಸರ್ವ ತೇಜೋರಾಶಿಗಾಶ್ರಯೇ
ಸರ್ವರುತ್ತಮ ಹರಿಯ ರಾಣಿಯೆ ಸರ್ವರುತ್ತಮಳೇ ।
ಸರ್ವ ಸ್ಥಳದಲಿ ದೀಪ್ಯಮಾನಳೆ ಸರ್ವ ವಾಕ್ಯಕೆ ಮುಖ್ಯ ಮಾನಿಯೆ
ಸರ್ವ ಕಾಲದಲೆನ್ನ ಜಿಹ್ವದಿ ನೀನೆ ನಟಿಸುವುದು, ಅಮ್ಮಾ ನೀನೆ ನಟಿಸುವುದು ॥ ೮೦ ॥

ಸರ್ವ ವಸ್ತ್ವಪರೋಕ್ಷ ಮೊದಲೂ ಸರ್ವ ಮಹಾಪುರುಷಾರ್ಥ ದಾತಳೆ
ಸರ್ವಕಾಂತಿಗಳೊಳಗೆ ಶುಭ ಲಾವಣ್ಯದಾಯಕಳೇ ।
ಸರ್ವ ಕಾಲದಿ ಸರ್ವ ಧಾತ್ರಿಯೆ ಸರ್ವ ರೀತಿಲಿ ಸುಮುಖಿಯಾಗಿ
ಸರ್ವ ಹೇಮ ಸುಪೂರ್ಣೆ ಎನ್ನಯ ನಯನದೊಳಗೆಸೆಯೆ, ಎನ್ನಯ ನಯನದೊಳಗೆಸೆಯೆ ॥ ೮೧ ॥

ಸಕಲ ಮಹಾಪುರುಷಾರ್ಥದಾಯಿನಿ ಸಕಲ ಜಗವನು ಪೆತ್ತ ಜನನಿಯೆ
ಸಕಲರೀಶ್ವರೀ ಸಕಲ ಭಯಗಳ ನಿತ್ಯ ಸಂಹಾರೀ ।
ಸಕಲ ಶ್ರೇಷ್ಠಳೆ ಸುಮುಖಿಯಾಗಿ ಸಕಲ ಭಾವವ ಧರಿಸಿ ಸರ್ವದಾ
ಸಕಲ ಹೇಮ ಸುಪೂರ್ಣೆ ಎನ್ನಯ ನಯನದೊಳಗೆಸೆಯೆ, ಅಮ್ಮಾ ನಯನದೊಳಗೆಸೆಯೆ ॥ ೮೨ ॥

ಸಕಲ ವಿಧ ವಿಘ್ನಾಪಹಾರಿಣಿಸಕಲ ಭಕ್ತೋದ್ಧಾರಕಾರಿಣಿ
ಸಕಲ ಸುಖ ಸೌಭಾಗ್ಯದಾಯಿನಿ ನೇತ್ರದೊಳಗೆಸೆಯೇ ।
ಸಕಲ ಕಲೆಗಳ ಸಹಿತ ನಿನ್ನಯ ಭಕುತನಾದವನೆಂದು ಸರ್ವದಾ
ವ್ಯಕುತಳಾಗಿರು ಎನ್ನ ಹೃದಯದ ಕಮಲ ಮಧ್ಯದಲಿ, ಹೃದಯದ ಕಮಲ ಮಧ್ಯದಲಿ ॥ ೮೩ ॥

ನಿನ್ನ ಕರುಣಾ ಪಾತ್ರನಾಗಿಹ ಎನ್ನ ಗೋಸುಗ ನೀನೆ ತ್ವರದಿ ಪ್ರ-
ಸನ್ನಳಾಗ್ಯಧಿದೇವಗಣನುತೆ ಸುಗುಣೆ ಪರಿಪೂರ್ಣೆ ।
ಎನ್ನ ಪೆತ್ತಿಹ ತಾಯೇ ಸರ್ವದಾ ಸನ್ನಿಹಿತಳಾಗೆನ್ನ ಮನೆಯೊಳು
ನಿನ್ನ ಪತಿ ಸಹವಾಗಿ ಸರ್ವದಾ ನಿಲಿಸು ಶುಭದಾಯೇ, ನಿಲಿಸು ಶುಭದಾಯೇ ॥ ೮೪ ॥

ಎನ್ನ ಮುಖದಲಿ ನೀನೆ ನಿಂತು ಘನ್ನನಿವನೆಂದೆನಿಸಿ ಲೋಕದಿ
ಧನ್ಯ ಧನ್ಯನ ಮಾಡು, ವರಗಳ ನೀಡು ನಲಿದಾಡು ।
ಅನ್ಯ ನಾ ನಿನಗಲ್ಲ ದೇವೀ ಜನ್ಯನಾದವನೆಂದು ತಿಳಿದು
ಅನ್ನ ವಸನವ ಧಾನ್ಯ ಧನವನು ನೀನೆ ಎನಗೀಯೇ, ಲಕ್ಷ್ಮೀ ನೀನೇ ಎನಗೀಯೇ ॥ ೮೫ ॥

ವತ್ಸ ಕೇಳೆಲೊ ಅಂಜಬೇಡವೋ ಸ್ವಚ್ಛ ಎನ್ನಯ ಕರವ ಶಿರದಲಿ
ಇಚ್ಛೆ ಪೂರ್ವಕ ನೀಡ್ದೆ ನಡಿ ಸರವತ್ರ ನಿರ್ಭಯದಿ ।
ಉತ್ಸಹಾತ್ಮ ಮನೋನುಕಂಪಿಯೆ ಪ್ರೋತ್ಸಹದಿ ಕಾರುಣ್ಯ ದೃಷ್ಟಿಲಿ
ತುಚ್ಛ ಮಾಡದೆ ವೀಕ್ಷಿಸೀಗಲೆ ಲಕ್ಷ್ಮೀ ಒಲಿ ಎನಗೆ, ಲಕ್ಷ್ಮೀ ಒಲಿ ಎನಗೆ ॥ ೮೬ ॥

ಮುದದಿ ಕರುಣ ಕಟಾಕ್ಷ ಜನರಿಗೆ ಉದಯವಾಗಲು ಸಕಲ ಸಂಪದ
ಒದಗಿ ಬರುವುದು ಮಿಥ್ಯವಲ್ಲವು ಬುಧರ ಸಮ್ಮತವು ।
ಅದಕೆ ನಿನ್ನಯ ಪದವ ನಂಬಿದೆ ಮುದದಿ ಎನ್ನಯ ಸದನದಲಿ ನೀ-
ನೊದಗಿ ಭಾಗ್ಯದ ನಿಧಿಯ ಪಾಲಿಸು ಪದುಮೆ ನಮಿಸುವೆನು, ಪಾಲಿಸು ಪದುಮೆ ನಮಿಸುವೆನು ॥ ೮೭ ॥

ರಾಮೆ ನಿನ್ನಯ ದೃಷ್ಟಿಲೋಕಕೆ ಕಾಮಧೇನೆಂದೆನಿಸಿಕೊಂಬದು
ರಾಮೆ ನಿನ್ನಯ ಮನಸು ಚಿಂತಾರತ್ನ ಭಜಿಪರಿಗೆ ।
ರಾಮೆ ನಿನ್ನಯ ಕರದ ದ್ವಂದ್ವವು ಕಾಮಿತಾರ್ಥವ ಕೇಳ್ವ ಜನರಿಗೆ
ಕಾಮಪೂರ್ತಿಪ ಕಲ್ಪವೃಕ್ಷವು ತಾನೆ ಎನಿಸಿಹುದು, ವೃಕ್ಷವು ತಾನೆ ಎನಿಸಿಹುದು ॥ ೮೮ ॥

ನವವೆನಿಪನಿಧಿ ನೀನೆ ಇಂದಿರೆ ತವ ದಯಾಭಿಧ ರಸವೇ ಎನಗೇ
ಧ್ರುವದಿ ದೇವಿ ರಸಾಯನವೆ ಸರಿ ಸರ್ವಕಾಲದಲಿ ।
ಭುವನ ಸಂಭವೆ ನಿನ್ನ ಮುಖವು ದಿವಿಯೊಳೊಪ್ಪುವ ಚಂದ್ರನಂದದಿ
ವಿವಿಧಕಳೆಗಳ ಪೂರ್ಣವಾದ್ಯಖಿಳಾರ್ಥ ಕೊಡುತಿಹುದು, ಅಖಿಳಾರ್ಥ ಕೊಡುತಿಹುದು ॥ ೮೯ ॥

ರಸದ ಸ್ಪರ್ಶದಲಿಂದ ಲೋಹವು ಮಿಸುಣಿ ಭಾವವ ಐದೋ ತೆರದಲಿ
ಅಸಮ ಮಹಿಮಳೆ ನಿನ್ನ ಕರುಣ ಕಟಾಕ್ಷ ನೋಟದಲಿ ।
ವಸುಧೆ ತಳದೊಳಗಿರ್ಪ ಜೀವರ ಅಶುಭ ಕೋಟಿಗಳೆಲ್ಲ ಪೋಗೀ
ಕುಸುಮ ಗಂಧಿಯೆ ಮಂಗಳೋತ್ಸವ ಸತತವಾಗುವುದು, ಉತ್ಸವ ಸತತವಾಗುವುದು ॥ ೯೦ ॥

ನೀಡು ಎಂದರೆ ಇಲ್ಲವೆಂಬುವ ರೂಢಿ ಜೀವರ ಮಾತಿಗಂಜುತ
ಬೇಡಿಕೊಂಬುದಕೀಗ ನಿನ್ನನು ಶರಣು ಹೊಂದಿದೆನು ।
ನೋಡಿ ಕರುಣ ಕಟಾಕ್ಷದಿಂದಯ ಮಾಡಿ ಮನದಭಿಲಾಷೆ ಪೂರ್ತಿಸಿ
ನೀಡು ಎನಗಖಿಳಾರ್ಥ ಭಾಗ್ಯವ ಹರಿಯ ಸಹಿತದಲಿ, ಭಾಗ್ಯವ ಹರಿಯ ಸಹಿತದಲಿ ॥ ೯೧ ॥

ಕಾಮಧೇನು ಸುಕಲ್ಪತರು ಚಿಂತಾಮಣಿ ಸಹವಾಗಿ ನಿನ್ನಯ
ಕಾಮಿತಾರ್ಥಗಳೀವ ಕಳೆಗಳಳುಣಿಸಿ ಇರುತಿಹವು ।
ರಾಮೇ ನಿನ್ನಯ ರಸರಸಾಯನ ಸ್ತೋಮದಿಂ ಶಿರ ಪಾದ ಪಾಣಿ
ಪ್ರೇಮಪೂರ್ವಕ ಸ್ಪರ್ಶವಾಗಲು ಹೇಮವಾಗುವುದು, ಹೇಮವಾಗುವುದು ॥ ೯೨ ॥

ಆದಿ ವಿಷ್ಣುನ ಧರ್ಮಪತ್ನಿಯೆ ಸಾದರದಿ ಹರಿ ಸಹಿತ ಎನ್ನಲಿ
ಮೋದದಿಂದಲಿ ಸನ್ನಿಧಾನವ ಮಾಡೆ ಕರುಣದಲಿ ।
ಆದಿ ಲಕ್ಷ್ಮಿಯೆ ಪರಮಾನುಗ್ರಹವಾದ ಮಾತ್ರದಿ ಎನಗೆ ಪದು ಪದೆ
ಆದಪುದು ಸರ್ವತ್ರ ಸರ್ವದಾ ನಿಧಿಯ ದರ್ಶನವು, ನಿಧಿಯ ದರ್ಶನವು ॥ ೯೩ ॥

ಆವ ಲಕ್ಷ್ಮೀ ಹೃದಯ ಮಂತ್ರವ ಸಾವಧಾನದಿ ಪಠಣೆಗೈವನು
ಆವ ಕಾಲದಿ ರಾಜ್ಯಲಕ್ಷ್ಮೀಯನೈದು ಸುಖಿಸುವನು ।
ಆವ ಮಹಾದಾರಿದ್ರ್ಯ ದೋಷಿಯು ಸೇವಿಸೆ ಮಹಾ ಧನಿಕನಾಗುವ
ದೇವಿ ಅವನಾಲಯದಿ ಸರ್ವದಾ ಸ್ಥಿರದಿ ನಿಲಿಸುವಳು ॥ ೯೪ ॥

ಲಕುಮಿ ಹೃದಯದ ಪಠಣೆ ಮಾತ್ರದಿ ಲಕುಮಿ ತಾ ಸಂತುಷ್ಟಳಾಗಿ
ಸಕಲ ದುರಿತಗಳಳಿದು ಸುಖ ಸೌಭಾಗ್ಯ ಕೊಡುತಿಹಳು ।
ವಿಕಸಿತಾನನೆ ವಿಷ್ಣುವಲ್ಲಭೆ ಭಕುತ ಜನರನು ಸರ್ವ ಕಾಲದಿ
ವೃಕುತಳಾದ್ಯವರನ್ನ ಪೊರೆವಳು ತನಯರಂದದಲಿ, ಲಕ್ಷ್ಮೀ ತನಯರಂದದಲಿ ॥ ೯೫ ॥

ದೇವಿ ಹೃದಯವು ಪರಮ ಗೋಪ್ಯವು ಸೇವಕನಿಗಖಿಳಾರ್ಥ ಕೊಡುವುದು
ಭಾವ ಪೂರ್ವಕ ಪಂಚಸಾವಿರ ಜಪಿಸೆ ಪುನಶ್ಚರಣ ।
ಈ ವಿಧಾನದಿ ಪಠಣೆ ಮಾಡಲು ತಾ ಒಲಿದು ಸೌಭಾಗ್ಯ ನಿಧಿಯನು
ತೀವ್ರದಿಂದಲಿ ಕೊಟ್ಟು ಸೇವಕರಲ್ಲಿ ನಿಲಿಸುವಳು, ಸೇವಕರಲ್ಲಿ ನಿಲಿಸುವಳು ॥ ೯೬ ॥

ಮೂರು ಕಾಲದಿ ಜಪಿಸಲುತ್ತಮ ಸಾರ ಭಕುತಿಲಿ ಒಂದು ಕಾಲದಿ
ಧೀರಮಾನವ ಪಠಿಸಲವನಖಿಳಾರ್ಥ ಐದುವನು ।
ಆರು ಪಠಣವಗೈಯ್ಯಲಿದನನುಭೂರಿ ಶ್ರವಣವ ಗೈದ ಮಾನವ
ಬಾರಿ ಬಾರಿಗೆ ಧನವ ಗಳಿಸುವ ಸಿರಿಯ ಕರುಣದಲಿ, ಸಿರಿಯ ಕರುಣದಲಿ ॥ ೯೭ ॥

ಶ್ರೀ ಮಹತ್ತರ ಲಕ್ಷ್ಮಿಗೋಸುಗ ಈ ಮಹತ್ತರ ಹೃದಯ ಮಂತ್ರವ
ಪ್ರೇಮಪೂರ್ವಕ ಭಾರ್ಗವಾರದ ರಾತ್ರಿ ಸಮಯದಲಿ ।
ನೇಮದಿಂದಲಿ ಪಂಚವಾರವ ಕಾಮಿಸೀಪರಿ ಪಠಣೆ ಮಾಡಲು
ಕಾಮಿತಾರ್ಥವನೈದಿ ಲೋಕದಿ ಬಾಳ್ವ ಮುದದಿಂದ, ಬಾಳ್ವ ಮುದದಿಂದ ॥ ೯೮ ॥

ಸಿರಿಯ ಹೃದಯ ಸುಮಂತ್ರದಿಂದಲಿ ಸ್ಮರಿಸಿ ಅನ್ನವ ಮಂತ್ರಿಸಿಡಲು
ಸಿರಿಯ ಪತಿ ತಾನವರ ಮಂದಿರದೊಳಗೆ ಅವತರಿಪ ।
ನರನೆ ಆಗಲಿ ನಾರಿ ಆಗಲಿ ಸಿರಿಯ ಹೃದಯ ಸುಮಂತ್ರದಿಂದಲಿ
ನಿರುತ ಮಂತ್ರಿತ ಜಲವ ಕುಡಿಯಲು ಧನಿಕ ಪುಟ್ಟುವನು, ಧನಿಕ ಪುಟ್ಟುವನು ॥ ೯೯ ॥

ಆವನಾಶ್ವೀಜ ಶುಕ್ಲ ಪಕ್ಷದಿ ದೇವಿ ಉತ್ಸವ ಕಾಲದೊಳು ತಾ
ಭಾವ ಶುದ್ಧಿಲಿ ಹೃದಯ ಜಪ ಒಂದಧಿಕ ದಿನದಿನದಿ ।
ಈ ವಿಧಾನದಿ ಜಪವ ಮಾಡಲು ಶ್ರೀವನದಿ ಸಂಪದವನೈದುವ
ಶ್ರೀವನಿತೆ ತಾ ಕನಕವೃಷ್ಟಿಯ ಕರೆವಳನವರತ, ಕರೆವಳನವರತ ॥ ೧೦೦ ॥

ಆವ ಭಕುತನು ವರುಷ ದಿನ ದಿನ ಭಾವ ಶುದ್ಧಿಲಿ ಎಲ್ಲ ಪೊತ್ತು
ಸಾವಧಾನದಿ ಹೃದಯ ಮಂತ್ರವ ಪಠಿಸಲವನಾಗ ।
ದೇವಿ ಕರುಣಕಟಾಕ್ಷದಿಂದಲಿ ದೇವ ಇಂದ್ರನಿಗಧಿಕನಾಗುವ
ಈ ವಸುಂಧರೆಯೊಳಗೆ ಭಾಗ್ಯದ ನಿಧಿಯು ತಾನೆನಿಪ, ಭಾಗ್ಯದ ನಿಧಿಯು ತಾನೆನಿಪ ॥ ೧೦೧ ॥

ಶ್ರೀಶ ಪದದಲಿ ಭಕುತಿ ಹರಿಪದ ದಾಸ ಜನಪದ ದಾಸ ಭಾವವ
ಈಸು ಮಂತ್ರಗಳರ್ಥ ಸಿದ್ಧಿಯು ಗುರುಪದ ಸ್ಮೃತಿಯು ।
ಲೇಸು ಜ್ಞಾನ ಸುಬುದ್ಧಿ ಪಾಲಿಸು ವಾಸವಾಗಿರು ಎನ್ನ ಮನೆಯಲಿ
ಈಶ ಸಹ ಎನ ತಾಯೆ ಉತ್ತಮ ಪದವು ನೀ ಸಿರಿಯೇ, ಉತ್ತಮ ಪದವು ನೀ ಸಿರಿಯೇ ॥ ೧೦೨ ॥

ಧರಣಿ ಪಾಲಕನೆನಿಸು ಎನ್ನನು ಪುರುಷರುತ್ತಮನೆನಿಸು ಸರ್ವದಾ
ಪರಮವೈಭವ ನಾನಾವಿಧವಾಗರ್ಥ ಸಿದ್ಧಿಗಳಾ ।
ಹಿರಿದು ಕೀರ್ತಿಯ ಬಹಳ ಭೋಗವ ಪರಮ ಭಕ್ತಿ ಜ್ಞಾನ ಸುಮತಿಯ
ಪರಿಮಿತಿಲ್ಲದೆ ಇತ್ತು ಪುನರಪಿ ಸಲಹು ಶ್ರೀದೇವೀ, ಸಲಹು ಶ್ರೀದೇವೀ ॥ ೧೦೩ ॥

ವಾದಮಾಡುದಕರ್ಥ ಸಿದ್ಧಿಯು ಮೋದತೀರ್ಥರ ಮತದಿ ದೀಕ್ಷವು
ಸಾದರದಿ ನೀನಿತ್ತು ಪಾಲಿಸು ವೇದದಭಿಮಾನೀ ।
ಮೋದದಲಿ ಪುತ್ರಾರ್ಥ ಸಿದ್ಧಿಯು ಓದದಲೆ ಸಿರಿ ಬ್ರಹ್ಮವಿದ್ಯವು
ಆದಿ ಭಾರ್ಗವಿ ಇತ್ತು ಪಾಲಿಸು ಜನ್ಮ ಜನ್ಮದಲೀ, ಜನ್ಮ ಜನ್ಮದಲೀ ॥ ೧೦೪ ॥

ಸ್ವರ್ಣ ವೃಷ್ಟಿಯ ಎನ್ನ ಮನೆಯಲಿ ಕರಿಯ ಧಾನ್ಯ ಸುವೃದ್ಧಿ ದಿನ ದಿನ
ಭರದಿ ನೀ ಕಲ್ಯಾಣ ವೃದ್ಧಿಯ ಮಾಡೆ ಸಂಭ್ರಮದೀ ।
ಸಿರಿಯೆ ಅತುಳ ವಿಭೂತಿ ವೃದ್ಧಿಯ ಹರುಷದಿಂದಲಿಗೈದು ಧರೆಯೊಳು
ಮೆರೆಯೆ ಸಂತತ ಉಪಮೆವಿಲ್ಲದೆ ಹರಿಯ ನಿಜ ರಾಣಿ, ಹರಿಯ ನಿಜ ರಾಣಿ ॥ ೧೦೫ ॥

ಮಂದಹಾಸ ಮುಖಾರವಿಂದಳೆ ಇಂದುಸೂರ್ಯರ ಕೋಟಿಭಾಸಳೆ
ಸುಂದರಾಂಗಿಯೆ ಪೀತವಸನಳೆ ಹೇಮಭೂಷಣಳೆ ।
ಕುಂದು ಇಲ್ಲದ ಬೀಜ ಪೂರಿತ ಚಂದವಾದ ಸುಹೇಮಕಲಶಗ-
ಳಿಂದ ನೀನೊಡಗೂಡಿ ತೀವ್ರದಿ ಬರುವುದೆನ್ನ ಮನೆಗೆ, ಬರುವುದೆನ್ನ ಮನೆಗೆ ॥ ೧೦೬ ॥

ನಮಿಪೆ ಶ್ರೀ ಹರಿ ರಾಣಿ ನಿನ್ನ ಪದ ಕಮಲಯುಗಕನವರತ ಭಕುತಿಲಿ
ಕಮಲೆ ನಿನ್ನಯ ವಿಮಲ ಕರಯುಗ ಎನ್ನ ಮಸ್ತಕದೀ ।
ಮಮತೆಯಿಂದಲಿ ಇಟ್ಟು ನಿಶ್ಚಲ ಅಮಿತ ಭಾಗ್ಯವ ನೀಡೆ ತ್ವರದಿ
ಕಮಲಜಾತಳೆ ರಮೆಯೆ ನಮೋ ನಮೋ ಮಾಳ್ಪೆನನವರತ, ನಮೋ ನಮೋ ಮಾಳ್ಪೆನನವರತ ॥ ೧೦೭ ॥

ಮಾತೆ ನಿನ್ನಯ ಜಠರಕಮಲ ಸುಜಾತನಾಗಿಹ ಸುತನ ತೆರದಿ
ಪ್ರೀತಿ ಪೂರ್ವಕ ಭಾಗ್ಯ ನಿಧಿಗಳನಿತ್ತು ನಿತ್ಯದಲಿ ।
ನೀತ ಭಕುತೀ ಜ್ಞಾನ ಪೂರ್ವಕ ದಾತ ಗುರು ಜಗನ್ನಾಥ ವಿಟ್ಠಲನ
ಪ್ರೀತಿಗೊಳಿಸುವ ಭಾಗ್ಯ ಪಾಲಿಸಿ ಪೊರೆಯೇ ನೀ ಎನ್ನ, ಲಕ್ಷ್ಮೀ ಪೊರೆಯೇ, ಅಮ್ಮಾ ಪೊರೆಯೇ ॥ ೧೦೮ ॥

॥ ಇತಿ ಶ್ರೀ ಜಗನ್ನಾಥ ದಾಸಾರ್ಯ ವಿರಚಿತ ಶ್ರೀ ಲಕ್ಷ್ಮೀ ಹೃದಯ ಸ್ತೋತ್ರಮ್ ಸಮಾಪ್ತಾ ॥